**FORM IV**
**(See Rule 12)**
**NOTICE**

It is hereby notified that the undersigned has changed his/her name from **BABU LOKAPPA HARIJAN** to **BABU LOKAPPA HEGADE.**

PD-123 **BABU LOKAPPA HEGADE**

**FORM IV**
**(See Rule 12)**
**NOTICE**

It is hereby notified that the undersigned has changed his/her name from **SADASHIV MALLESHAPPA DOMBAR** to **SADASHIV MALLESHAPPA KABBALGI.**

PD-125 **SADASHIV MALLESHAPPA KABBALGI**

**ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ**

**ಅಂಚೆಚೀಲ-5313, ಬಹುಮಹಡಿ ಕಟ್ಟಡ, 2ನೇ ಹಂತ, 2ನೇ ಮಹಡಿ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಸಿ1/ಸಿಆರ್-32/2004-05, ದಿನಾಂಕ: 21ನೇ ಜುಲೈ 2004**

**ವಿಷಯ:-** ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣದಲ್ಲಿನ ಪರಿಶಿಷ್ಟ ಜಾತಿಯ ಒಂದು ಪ್ರ.ದ.ಸ. ಬ್ಯಾಕ್‌ಲಾಗ್ ಹುದ್ದೆ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:-** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್.ಬಿ.ಸಿ:2001, ದಿನಾಂಕ: 21.11.2001.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ:2001, ದಿನಾಂಕ: 1.6.2002.

ಕರ್ನಾಟಕ ನಾಗರೀಕ ಸೇವೆಗಳು (ಪ.ಜಾ. ಮತ್ತು ಪ.ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಿಟ್ಟ ಭರ್ತಿಯಾಗದ ರಿಕ್ತ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು, 2001ರ ಮೇರೆಗೆ ಈ ನ್ಯಾಯಾಧೀಕರಣದಲ್ಲಿನ ಭರ್ತಿಯಾಗದ ಪ.ಜಾತಿಯ ಒಂದು ಪ್ರ.ದ.ಸ. ಬ್ಯಾಕ್‌ಲಾಗ್ ಹುದ್ದೆಗೆ ಪರಿಶಿಷ್ಟ ಜಾತಿಗೆ ಸೇರಿದ ಅರ್ಹ ಅಭ್ಯರ್ಥಿಗಳಿಂದ ಕರ್ನಾಟಕ ಸರ್ಕಾರ ನಿಗದಿಪಡಿಸಿದ ಅರ್ಜಿ ನಮೂನೆ ಭಾಗ-1 ರಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರ ಕೆಳಕಂಡಂತೆ ಇರುತ್ತದೆ.

(1) **ಪ್ರ.ದ.ಸ. - ಒಂದು ಹುದ್ದೆ - ಪರಿಶಿಷ್ಟ ಜಾತಿ (ಸಾಮಾನ್ಯ)**

(2) **ಕನಿಷ್ಠ ವಿದ್ಯಾರ್ಹತೆ:**
ಅಂಗೀಕೃತ ವಿಶ್ವವಿದ್ಯಾಲಯದಿಂದ ಪಡೆದ ಯಾವುದೇ ಪದವಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು. ವಿಶ್ವವಿದ್ಯಾಲಯ ನೀಡದೇ ಇರುವ ಪದವಿಯನ್ನು ಮಾನ್ಯತೆ ಮಾಡಲಾಗುವುದಿಲ್ಲ.

(3) **ವಯೋಮಿತಿ:**
ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಕನಿಷ್ಠ 18 ವರ್ಷ ಹೊಂದಿರಬೇಕು ಹಾಗೂ ಗರಿಷ್ಠ 40 ವರ್ಷ ವಯೋಮಿತಿ ಮೀರಿರಬಾರದು.

(4) **ವೇತನಶ್ರೇಣಿ:**
ರೂ. 3850-100-4450-125-5700-150-7050

(5) **ನೇಮಕಾತಿ ವಿಧಾನ:**
ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ನಾಗರೀಕ ಸೇವೆ (ಪ.ಜಾ): ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಿಟ್ಟ ಭರ್ತಿಯಾಗದ ರಿಕ್ತ ಸ್ಥಾನಗಳು (ವಿಶೇಷ ನೇಮಕಾತಿ) ನಿಯಮಗಳು, 2001ರ ಉಪಬಂಧಗಳ ಅನ್ವಯ ನಡೆಯುತ್ತದೆ. ಅಭ್ಯರ್ಥಿಗಳು ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರನ್ನು ಆಧರಿಸಿ ಅರ್ಹತಾ ಪಟ್ಟಿಯನ್ನು ತಯಾರಿಸುವ ಮೂಲಕ ಆಯ್ಕೆ ಮಾಡಲಾಗುವುದು.

(6) ವಯಸ್ಸು, ವಿದ್ಯಾರ್ಹತೆ ಹಾಗೂ ನಿಗದಿತ ನಮೂನೆಯಲ್ಲಿ ಜಾತಿ ಪ್ರಮಾಣ ಪತ್ರ ಇವುಗಳ ಸಮರ್ಥನೆಗಾಗಿ ಸಕ್ಷಮ ಪ್ರಾಧಿಕಾರ ನೀಡಿದ ದೃಢೀಕೃತ ಪ್ರಮಾಣ ಪತ್ರಗಳೊಂದಿಗೆ ಎಲ್ಲಾ ವಿಧದಲ್ಲಿ ಪೂರ್ಣಗೊಂಡ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಕವರ್ ಮೇಲೆ ದಪ್ಪಕ್ಷರಗಳಲ್ಲಿ "ಪ್ರ.ದ.ಸ. ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ" ಎಂದು ನಮೂದಿಸಿ **ದಿನಾಂಕ: 21.9.2004 ರ ಮಧ್ಯಾಹ್ನ 4.30 ಘಂಟೆಯ ಒಳಗೆ ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, 2ನೇ ಹಂತ, 2ನೇ ಮಹಡಿ, ಬಹುಮಹಡಿಗಳ ಕಟ್ಟಡ, ಅಂಚೆ ಪೆಟ್ಟಿಗೆ ಸಂಖ್ಯೆ: 5313, ಬೆಂಗಳೂರು-560 001** ಇವರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಬೇಕು. ಈ ದಿನಾಂಕ ಸಾರ್ವಜನಿಕ ರಜಾ ದಿನವಾಗಿ ಘೋಷಿಸಲ್ಪಟ್ಟಲ್ಲಿ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುವುದು. ಅರ್ಜಿಯು ಕೆಳಕಂಡ ದಾಖಲೆಗಳನ್ನು ಹೊಂದಿರತಕ್ಕದ್ದು.

ಅ) ಅರ್ಜಿದಾರರು ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಾಗಿದ್ದಲ್ಲಿ, ಆ ಇಲಾಖೆಯ ನೇಮಕಾತಿ ಪ್ರಾಧಿಕಾರಸ್ಥರ ಮುಖಾಂತರ ಸೇವಾ ಪ್ರಮಾಣ ಪತ್ರದೊಂದಿಗೆ ಸಲ್ಲಿಸತಕ್ಕದ್ದು.

ಆ) ಕಾಲೇಜಿನ ಪ್ರಾಂಶುಪಾಲರು ನೀಡಿದ ಹಾಗೂ ಅಭ್ಯರ್ಥಿಗೆ ಸಂಬಂಧವಿರದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿದ ನಡತೆ ಪ್ರಮಾಣ ಪತ್ರ.

ಇ) ಪದವಿಯ ಎಲ್ಲಾ ವರ್ಷಗಳ ಪಬ್ಲಿಕ್ ಪರೀಕ್ಷೆಗಳ:ಸೆಮಿಸ್ಟರ್‌ಗಳ ಅಭ್ಯರ್ಥಿಯಿಂದ ಸ್ವಯಂ ದೃಢೀಕರಿಸಲ್ಪಟ್ಟ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣಪತ್ರ. (ಪಾಸಿಂಗ್ ಸರ್ಟಿಫಿಕೇಟ್)

ಈ) ಹುಟ್ಟಿನಿಂದ ಅಭ್ಯರ್ಥಿಯು ಭಾರತೀಯ ನಾಗರೀಕರಾಗಿಲ್ಲದಿದ್ದಲ್ಲಿ, ಅಭ್ಯರ್ಥಿಯು ವಾಸ ಮಾಡುತ್ತಿರುವ ಸ್ಥಳದ ಜಿಲ್ಲೆಯ ಜಿಲ್ಲಾಧಿಕಾರಿಗಳು:ಜಿಲ್ಲಾ ಮ್ಯಾಜಿಸ್ಟ್ರೇಟ್ ನೀಡಿದ ಪ್ರಮಾಣಪತ್ರ (ಪಾಸಿಂಗ್ ಸರ್ಟಿಫಿಕೇಟ್)

ಉ) ವಯಸ್ಸಿನ ರುಜುವಾತಿಗಾಗಿ ಅಭ್ಯರ್ಥಿಯಿಂದ ಸ್ವಯಂ ದೃಢೀಕರಿಸಲ್ಪಟ್ಟ ಎಸ್.ಎಸ್.ಎಲ್.ಸಿ. ಅಂಕಪಟ್ಟಿ:ವರ್ಗಾವಣೆ ಪ್ರಮಾಣ ಪತ್ರ.

ಊ) ಮೀಸಲಾತಿ ಕೋರುವ ಪ.ಜಾ. ಅಭ್ಯರ್ಥಿ ಸರ್ಕಾರಿ ಆದೇಶ ಸಂಖ್ಯೆ: ಸಕಇ:132:ಎಸ್‌ಎಡಿ 97(1) ದಿನಾಂಕ: 8.2.2000 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ತಹಸೀಲ್ದಾರ್‌ರಿಂದ ಪಡೆದ ಜಾತಿ ಪ್ರಮಾಣ ಪತ್ರದ ಸ್ವಯಂ ದೃಢೀಕರಿಸಿದ ಪ್ರತಿ ಅಥವಾ ಸಂಬಂಧಿಸಿದ ಜಿಲ್ಲಾ ಜಾತಿ ಪರಿಶೀಲನಾ ಸಮಿತಿಯಿಂದ ನಮೂನೆ 1ಎ ರಲ್ಲಿ ಪಡೆದ ಸಿಂಧುತ್ವ ಪ್ರಮಾಣ ಪತ್ರದ ಸ್ವಯಂ ದೃಢೀಕರಿಸಿದ ಪ್ರತಿ.

(7) ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ 1ನೇ ಪುಟದ ಎಡಮೇಲ್ಭಾಗದಲ್ಲಿ ತಮ್ಮ ರುಜುವಿನೊಂದಿಗೆ ಅಂಟಿಸುವುದು.

(8) ನ್ಯೂನತೆ ಉಳ್ಳ, ಅಪೂರ್ಣವಾದ ಹಾಗೂ ತಡವಾಗಿ ಸ್ವೀಕೃತವಾಗುವ ಅರ್ಜಿಗಳು ತಿರಸ್ಕೃತವಾಗುತ್ತವೆ.

(9) ಆಯ್ಕೆಯಾದ ಅಭ್ಯರ್ಥಿಯ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲೆಯಾಗಿದೆಯೆಂದು ತಿಳಿದುಬಂದಲ್ಲಿ ಅಂತಹ ಅಭ್ಯರ್ಥಿಯನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

(10) ನಿಗದಿಪಡಿಸಿದ ಅರ್ಜಿ ನಮೂನೆಗಳನ್ನು ಸರ್ಕಾರಿ ಮುದ್ರಣಾಲಯದ ಮಳಿಗೆ ಅಥವಾ ಸರ್ಕಾರಿ ಪುಸ್ತಕ ಮಳಿಗೆಯಿಂದ ಅಗತ್ಯ ಶುಲ್ಕ ಪಾವತಿ ಮಾಡಿ ಪಡೆಯಬಹುದಾಗಿದೆ.

(11) ಅರ್ಜಿದಾರರು ಕೃಷಿ ಪದವೀಧರರಾಗಿದ್ದಲ್ಲಿ, ವಿಶ್ವವಿದ್ಯಾಲಯ ನೀಡಿದ ಶೇಕಡಾವಾರು ಅಂಕ ಒಳಗೊಂಡ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಪ್ರತಿ ಲಗತ್ತಿಸತಕ್ಕದ್ದು.
ಅಭ್ಯರ್ಥಿ ಆಯ್ಕೆಗಾಗಿ ಶಿಫಾರಸ್ಸು:ಒತ್ತಡ ತಂದಲ್ಲಿ ಅಂಥವರು ಆಯ್ಕೆಗೆ ಅನರ್ಹರಾಗುವರು.

ಸಹಿ/-

ಪಿ.ಆರ್. 346 ಅಧ್ಯಕ್ಷರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು.

**ತೋಟಗಾರಿಕೆ ಇಲಾಖೆ**

**ಪಟ್ಟಣ ಪಂಚಾಯಿತಿ ಕಾರ್ಯಾಲಯ, ಶೃಂಗೇರಿ-577 139, ಚಿಕ್ಕಮಗಳೂರು**

**ಪ್ರಕಟಣೆ**

**ದಿನಾಂಕ: 15ನೇ ಜುಲೈ 2004**

ಶೃಂಗೇರಿ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ನಡೆಸುವ ಉದ್ದಿಮೆ ಪರವಾನಿಗೆ ಶುಲ್ಕವನ್ನು ಪರಿಷ್ಕರಿಸಲು ಶೃಂಗೇರಿ ಪಟ್ಟಣ ಪಂಚಾಯ್ತಿ ಅಧ್ಯಕ್ಷರಾದ ಎಸ್.ಕೆ. ಸತೀಶ್ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 30.6.2004 ರಂದು ನಡೆದ ಸಾಮಾನ್ಯ ಸಭೆ ವಿಷಯದ ನಂ. 10 ರಲ್ಲಿ ಸರ್ವಾನುಮತದಿಂದ ತೀರ್ಮಾನಿಸಲಾಗಿದೆ. ಕರ್ನಾಟಕ ಪುರಸಭೆಗಳ ಕಾಯ್ದೆ 1964 ರ ಕಲಂ 324 ಹಾಗೂ ತ್ಯಾಜ್ಯ ವಸ್ತುಗಳ ವಿಲೇವಾರಿ ನಿಯಮ 2000 ರ ವ್ಯಾಪ್ತಿಗೆ ಒಳಪಡಿಸಿ 1.4.2005 ರಿಂದ ಜಾರಿಗೆ ಬರುವಂತೆ ಉದ್ದಿಮೆ ಪರವಾನಿಗೆ ಶುಲ್ಕಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಪ್ರಕಟಣೆಯಾದ 60 ದಿನಗಳ ಒಳಗಾಗಿ ಸಕಾರಣ ಸಹಿತ ಸಲ್ಲಿಸಲು ಸಾರ್ವಜನಿಕರಿಗೆ ಅವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

| ಕ್ರ.ಸಂ. | ಉದ್ದಿಮೆ ವಿವರ | ಪರಿಷ್ಕೃತ ಶುಲ್ಕ |
|---|---|---|
| 1 | ದಿನಸಿ ಅಂಗಡಿ<br>ಅಕ್ಕಿ, ಹೊಗೆಸೊಪ್ಪು, ತೆಂಗಿನಕಾಯಿ, ಹಿಟ್ಟುಗಳು ಬೀಡಿ, ನಶ್ಯೆ, ಸಿಗರೇಟು, ಸಕ್ಕರೆ, ಪ್ಲಾಸ್ಟಿಕ್ ವಸ್ತುಗಳು, ಎಣ್ಣೆ, ಸುಣ್ಣ, ಬೆಣ್ಣೆ, ತುಪ್ಪ, ಸೌಂದರ್ಯವರ್ಧಕ, ಮಸಾಲೆ ವಸ್ತುಗಳು, ಕರ್ಪೂರ, ಕೊಬ್ಬರಿ, ಬೆಂಕಿಕಡ್ಡಿ, ಸ್ಪಿರಿಟ್, ಬೆಲ್ಲ, ಅಡಿಕೆ ಇವುಗಳ ದಾಸ್ತಾನು ಹಾಗೂ ಮಾರಾಟ | |
| ಎ) | ದೊಡ್ಡ ಪ್ರಮಾಣದ ಅಂಗಡಿ | 250.00 |
| ಬಿ) | ಚಿಕ್ಕ ಪ್ರಮಾಣದ ಅಂಗಡಿ | 100.00 |
| 2 | ಚಿನ್ನ ಬೆಳ್ಳಿ ವಸ್ತುಗಳ ತಯಾರಿಕೆ ಮತ್ತು ಮಾರಾಟ | 200.00 |
| 3 | ತಾಮ್ರ, ಕಂಚು, ಹಿತ್ತಾಳೆ ಸ್ಟೇನ್‌ಲೆಸ್ ಸ್ಟೀಲ್ ವಸ್ತುಗಳ ತಯಾರಿಕೆ ಮತ್ತು ಮಾರಾಟ, ಕಬ್ಬಿಣದ ಕಮ್ಮಾರಿಕೆ ವಸ್ತುಗಳ ತಯಾರಿಕೆ ಮತ್ತು ಮಾರಾಟ | 200.00 |
| 4 | ಕಬ್ಬಿಣದ ಹಾಗೂ ಕಬ್ಬಿಣೇತರ ಲೋಹಗಳನ್ನು ಕತ್ತರಿಸುವುದು, ರಂಧ್ರ ಕೊರೆಯುವುದು ಸಾಣೆ ಹಿಡಿಯುವುದು, ಬೆಸುಗೆ ಹಾಕುವುದು, ವಿದ್ಯುತ್ ಯಂತ್ರದೊಂದಿಗೆ ವರ್ಕ್‌ಶಾಪ್ ನಡೆಸುವುದು | 200.00 |

| ಕ್ರ.ಸಂ. | ಉದ್ದಿಮೆ ವಿವರ | ಪರಿಷ್ಕೃತ ಶುಲ್ಕ |
|---|---|---|
| 5 | ನಾಲ್ಕು ಚಕ್ರ ವಾಹನಗಳ ಗ್ಯಾರೇಜು | 250.00 |
| 6 | ದ್ವಿಚಕ್ರ, ತ್ರಿಚಕ್ರ ವಾಹನಗಳ ದುರಸ್ತಿ ಗ್ಯಾರೇಜು | 150.00 |
| 7 | ಎಲ್ಲಾ ನಮೂನೆಯ ಅಶ್ವಶಕ್ತಿಯ ಇಂಧನ ವಾಹನಗಳ ಮಾರಾಟದ ಅಂಗಡಿ ನಡೆಸುವುದು | 250.00 |
| 8 | ಬಟ್ಟೆ ಲಾಂಡ್ರಿ ನಡೆಸುವುದು ಬಣ್ಣ ಕೊಡುವುದು, ಯಾಂತ್ರಿಕವಾಗಿ ಮತ್ತು ಯಂತ್ರ ರಹಿತವಾಗಿ | 100.00 |
| 9 | ಛಾಯಾಚಿತ್ರ ತಯಾರಿಸುವುದು, ಛಾಯಾಗ್ರಾಹಣ ವಸ್ತುಗಳ ಸಂಗ್ರಹ, ಮಾರಾಟ ಜೆರಾಕ್ಸ್ ಕೇಂದ್ರಗಳನ್ನು ನಡೆಸುವುದು | 100.00 |
| 10 | ರೇಡಿಯೋ, ಟಿ.ವಿ. ವಾಚ್ ವೀಡಿಯೋ ಗೃಹೋಪಯೋಗಿ ಸಾಮಗ್ರಿ ಮಾರಾಟ | 200.00 |
| 11 | ಲೀಥೋ ಮುದ್ರಣ ಮತ್ತು ಸಾಮಾನ್ಯ ಮುದ್ರಣಾಲಯ | 150.00 |
| 12 | ಎಲ್ಲಾ ಬಗೆಯ ಧಾನ್ಯಗಳ ಹಿಟ್ಟು ತಯಾರಿಕೆ ಹಾಗೂ ವಸ್ತುಗಳನ್ನು ಹುರಿದು ಹಿಟ್ಟು ತಯಾರಿಸುವುದು | 150.00 |
| 13 | ಎಲ್ಲಾ ಬಗೆಯ ಮರಗಳನ್ನು ಕೊಯ್ಯುವುದು (ಸಾಮಿಲ್) | 250.00 |
| 14 | ಯಂತ್ರಗಳ ಮೂಲಕ ಭತ್ತದ ಹೊಟ್ಟು ಸಿಪ್ಪೆ ತೆಗೆಯುವುದು (ಅಕ್ಕಿ ಗಿರಣಿ) | 250.00 |
| 15 | ಎಲ್ಲಾ ಬಗೆಯ ಮರಗಳಿಂದ ಮತ್ತು ಉಕ್ಕಿನಿಂದ ಪೀಠೋಪಕರಣಗಳ ತಯಾರಿಕೆ ದಾಸ್ತಾನು ಹಾಗೂ ಮಾರಾಟ ಶ್ರೀಗಂಧ ಪ್ಲೈವುಡ್ ಸೇರಿ. | 200.00 |
| 16 | ಟ್ಯೂಬ್ ವಲ್ಕನೈಸಿಂಗ್ | 100.00 |
| 17 | ಕಂಬಾರಿಕೆ, ಚಮ್ಮಾರಿಕೆ, ಬಿದಿರಿನ ಸಾಮಗ್ರಿ ತಯಾರಿಕೆ, ಬೆತ್ತದ ಸಾಮಗ್ರಿ ತಯಾರಿಕೆ ಮತ್ತು ಮಾರಾಟ | 100.00 |
| 18 | ಚರ್ಮದ ಕೃತಕ ಚರ್ಮದ, ಪ್ಲಾಸ್ಟಿಕ್ ಚಪ್ಪಲಿ ಷೂಗಳ ಸಂಗ್ರಹ ಮತ್ತು ಮಾರಾಟ | 150.00 |
| 19 | ಸ್ಫೋಟಕ ಪುಡಿ, ತೋಟ ಬಂದೂಕಿನ ಮದ್ದು, ಚೆರೆ ತೋಟ, ಪಟಾಕಿ ಬಿರುಸು ಬಾಣಗಳ ಸಂಗ್ರಹ ಮಾರಾಟ | 200.00 |
| 20 | ಔಷಧಿಗಳ ದಾಸ್ತಾನು ಮತ್ತು ಮಾರಾಟ (ಹೋಮಿಯೋಪತಿ, ಯುನಾನಿ, ಆಯುರ್ವೇದಿಕ್ ಬಿಟ್ಟು) | 100.00 |
| 21 | ಸಿಮೆಂಟ್ ದಾಸ್ತಾನು ಸಿಮೆಂಟ್ ವಸ್ತುಗಳ ತಯಾರಿಕೆ ಮಾರಾಟ, ಕೃತಕ ಗೊಬ್ಬರ ಕ್ರಿಮಿನಾಶಕಗಳು ರಾಸಾಯನಿಕಗಳು ಸಂಗ್ರಹ ಮತ್ತು ಮಾರಾಟ | 200.00 |
| 22 | ಸೋಡಾ ಪಾನೀಯ, ತಂಪು ಪಾನೀಯ ತಯಾರಿಸುವುದು ಮತ್ತು ಮಾರಾಟ ಮಾಡುವುದು, ಐಸ್‌ಕ್ರೀಂ ತಯಾರಿಕೆ | 100.00 |
| 23 | ಒಣಮೀನು ದಾಸ್ತಾನು ಮತ್ತು ಮಾರಾಟ, ಹಸಿಮೀನು ದಾಸ್ತಾನು ಮತ್ತು ಮಾರಾಟ | 100.00 |
| 24 | ಕುರಿ, ಆಡು, ಕೋಳಿಗಳ ಮಾಂಸ ತಯಾರಿಕೆ ಮತ್ತು ಮಾರಾಟ | 200.00 |
| 25 | ಎಲ್ಲಾ ಬಗೆಯ ಕಾಗದ, ಕಾರ್ಡ್ ಬೋರ್ಡ್ ಪ್ಲೈವುಡ್, ಕೃತಕ ಹಲಗೆ ದಾಸ್ತಾನು ಮತ್ತು ಮಾರಾಟ, ಗೋಣಿ ನಾರು ಮಾರಾಟ | 100.00 |
| 26 | ಪ್ಲಾಸ್ಟಿಕ್, ಪಾಲಿಥಿನ್, ವಸ್ತುಗಳು ಪೆಟ್ರೋಲಿಯಂ ಉತ್ಪನ್ನಗಳು, ದ್ರವ್ಯ ಸಾಮಗ್ರಿಗಳು, ಬೆಂಕಿಕಡ್ಡಿ ಪೊಟ್ಟಣಗಳ ದಾಸ್ತಾನು ಮತ್ತು ಮಾರಾಟ | 200.00 |
| 27 | ಹತ್ತಿ ಬಟ್ಟೆ, ರೇಷ್ಮೆ ಬಟ್ಟೆ ಕೃತಕ ರೇಷ್ಮೆ ರೆಕ್ಸಿನ್ ಲೆದರ್ ಕ್ಲಾತ್, ಜಲ ನಿರೋಧಕಗಳು, ಸಿದ್ಧ ಉಡುಪುಗಳು ದಾಸ್ತಾನು ಮತ್ತು ಮಾರಾಟ | 250.00 |
| 28 | ಹಣ್ಣುಗಳು ಮತ್ತು ತರಕಾರಿ ಮಾರಾಟ | 100.00 |
| 29 | ಕ್ಷೌರದ ಅಥವಾ ಹೇರ್ ಡ್ರೆಸ್ಸಿಂಗ್ ಸೆಲೂನ್ ನಡೆಸುವುದು | 75.00 |
| 30 | ಬೈಸಿಕಲ್ ಮಾರಾಟ ಅಥವಾ ಬಾಡಿಗೆಗೆ ನೀಡುವುದು | 100.00 |
| 31 | ಸಾರಾಯಿ ಅಂಗಡಿ ನಡೆಸುವಿಕೆ | 200.00 |
| 32 | ಸಾರಾಯಿ ಬ್ರಾಂದಿ ರಕಂ ದಾಸ್ತಾನು | 500.00 |
| 33 | ಮದ್ಯ ಮಾರಾಟದ ಅಂಗಡಿ | 250.00 |
| 34 | ಸಿದ್ಧ ಉಡುಪುಗಳ ತಯಾರಿಕೆ ಟೈಲರಿಂಗ್ | 75.00 |
| 35 | ವಸತಿ ಗೃಹಗಳು 1 ರಿಂದ 10 ಕೊಠಡಿಗಳವರೆಗೆ<br>10 ರಿಂದ ಮೇಲ್ಪಟ್ಟು | 250.00<br>500.00 |

| ಕ್ರ.ಸಂ. | ಉದ್ದಿಮೆ ವಿವರ | ಪರಿಷ್ಕೃತ ಶುಲ್ಕ |
|---|---|---|
| 36 | ಉಪಹಾರ ಗೃಹಗಳು, ಭೋಜನ ರಹಿತ, ಬೇಕರಿಗಳು | 150.00 |
| 37 | ಊಟ ಉಪಹಾರ ಗೃಹಗಳು | 200.00 |
| 38 | ಮಾಂಸಾಹಾರಿ ಹೋಟೆಲ್‌ಗಳು | 250.00 |
| 39 | ನರ್ಸಿಂಗ್ ಹೋಮ್‌ಗಳು | 250.00 |
| 40 | ಡಿಷ್ ಕೇಬಲ್ ಸರ್ವೀಸ್ | 500.00 |
| 41 | ಕಂಪ್ಯೂಟರ್, ಇಂಟರ್‌ನೆಟ್, ಡಿ.ಟಿ.ಪಿ. ಸೆಂಟರ್ | 100.00 |
| 42 | ಎಸ್.ಟಿ.ಡಿ. ಬೂತ್ | 100.00 |
| 43 | ಇತರೆ ಉದ್ಯಮಗಳಿಗೆ | 150.00 |

**ಎಂ.ಟಿ. ಶಂಕರಪ್ಪ**

ಪಿ.ಡಿ. 5 ಮುಖ್ಯಾಧಿಕಾರಿ, ಪಟ್ಟಣ ಪಂಚಾಯಿತಿ, ಶೃಂಗೇರಿ.

**ಕಮಾಂಡೆಂಟ್ ರವರ ಕಛೇರಿ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ-577 222**

**ಟೆಂಡರ್-ಕಮ್-ಬಹಿರಂಗ ಹರಾಜು**

**ಸಂಖ್ಯೆ: 48/ವಾವಿ/28/2004-05, ದಿನಾಂಕ: 20ನೇ ಜುಲೈ 2004**

**ವಿಷಯ:-** ಈ ಘಟಕದ ವಾಹನ ಸಾರಿಗೆ ವಿಭಾಗದ ದಾಸ್ತಾನಿನಲ್ಲಿರುವ ಬಿಡಿಭಾಗಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:-** ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ರವರ ಜ್ಞಾಪನ ಸಂಖ್ಯೆ: ವಾ.ಸಾ.ವಿ/69/2004-05, ದಿನಾಂಕ: 8.6.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಹೆಸರಿಸಿರುವ ಅನುಪಯುಕ್ತಗೊಂಡ ವಿವಿಧ ರೀತಿಯ ವಾಹನದ ಬಿಡಿಭಾಗಗಳು ಹಾಗೂ ಸುಟ್ಟ ಆಯಿಲ್‌ನ್ನು ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಮಾಚೇನಹಳ್ಳಿ, ಶಿವಮೊಗ್ಗ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ದಿನಾಂಕ: 20.8.2004 ರಂದು ಬೆಳಿಗ್ಗೆ 10.00 ಗಂಟೆಗೆ ಬಹಿರಂಗ ಹರಾಜು ಮಾಡಲಾಗುವುದು.

**ಬಿಡಿಭಾಗಗಳ ವಿವರ**

| | | |
|---|---|---|
| 1 | ವಿವಿಧ ಅಳತೆಯ ಟೈರುಗಳು | 62 |
| 2 | ವಿವಿಧ ಅಳತೆಯ ಟ್ಯೂಬುಗಳು | 62 |
| 3 | ವಿವಿಧ ಅಳತೆಯ ಫ್ಲಾಪ್‌ಗಳು | 54 |
| 4 | ವಿವಿಧ ರೀತಿಯ ಬಿಡಿಭಾಗಗಳು | 249 |
| 5 | ಸುಟ್ಟ ಇಂಜಿನ್ ಆಯಿಲ್ | 400 ಲೀಟರ್ |

ಮೇಲೆ ನಮೂದಿಸಿರುವ ಅನುಪಯುಕ್ತ ವಸ್ತುಗಳನ್ನು ಈ ಕೆಳಗಿನ ಷರತ್ತುಗಳೊಂದಿಗೆ ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರನ್ನು ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ಇವರಿಗೆ "ಅನುಪಯುಕ್ತ ವಸ್ತುಗಳ ಖರೀದಿಗಾಗಿ ಟೆಂಡರ್" ಎಂದು ಲಕೋಟೆಯ ಮೇಲೆ ಬರೆದು ಕಳಿಸುವುದು.
2. ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆಯತಕ್ಕದ್ದು.
3. ಹರಾಜಿನಲ್ಲಿ ಭಾಗವಹಿಸುವವರು ರೂ. 2,000.00 (ರೂ. ಎರಡು ಸಾವಿರ ಮಾತ್ರ) ಗಳನ್ನು ಹರಾಜಿಗೆ ಮೊದಲೇ ಠೇವಣಿಯಾಗಿ ಕಮಾಂಡೆಂಟ್, 8ನೇ ಪಡೆ, ಕೆ.ಎಸ್.ಆರ್.ಪಿ. ಶಿವಮೊಗ್ಗ ರವರಲ್ಲಿ ಠೇವಣಿ ಇಡತಕ್ಕದ್ದು.
4. ಪ್ರತಿ ವಸ್ತುಗಳ ಗುಣವನ್ನು ಅತೀ ಹೆಚ್ಚಿನ ಮೌಲ್ಯಕ್ಕೆ ಸೂಚಿಸಿದ ಠೇವಣಿದಾರರಿಗೆ ಬಿಡಲಾಗುವುದು.
5. ಬಿಡ್ ಮೊಬಲಗನ್ನು ವಸ್ತುಗಳನ್ನು ಖರೀದಿಸಿದ ದಿನವೇ ಪೂರ್ಣವಾಗಿ ನಗದಾಗಿ ಪಾವತಿಸತಕ್ಕದ್ದು (ಚೆಕ್ ಸ್ವೀಕರಿಸುವುದಿಲ್ಲ). ತಪ್ಪಿದಲ್ಲಿ, ಖರೀದಿಸಿದ ವಸ್ತುಗಳನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನ ಮೌಲ್ಯ ಕಡಿಮೆಯಾದಲ್ಲಿ ತಪ್ಪಿತಸ್ಥರಾದ ಮೊದಲ ಖರೀದಿದಾರರಾದ ನೀವೇ ಭರಿಸತಕ್ಕದ್ದು.
6. ಹರಾಜು ಮಾಡುವ ಅಧಿಕಾರಿಯು ಯಾವುದೇ ಕಾರಣವಿಲ್ಲದೇ ಬಿಡ್ಡನ್ನು ಮುನ್ಸೂಚನೆ ಇಲ್ಲದೆ ಹಸ್ತಾಂತರ ಮಾಡಲು ಒಪ್ಪುವ/ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
7. ವಸ್ತುಗಳನ್ನು ಖರೀದಿಸಿದ ಮೌಲ್ಯದ ಮೊತ್ತವನ್ನು ಹಾಗೂ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಬಿಡ್ ಹಣದ ಜೊತೆಯಲ್ಲಿಯೇ ವಸೂಲಿ ಮಾಡಲಾಗುವುದು.

8. ವಸ್ತುಗಳನ್ನು ಖರೀದಿ ಮಾಡಿದವರೇ ಅದೇ ದಿನ ಹರಾಜು ಸ್ಥಳದಿಂದ ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳತಕ್ಕದ್ದು.
9. ಠೇವಣಿಯಾಗಿಟ್ಟ ರೂ. 2,000.00 ಗಳನ್ನು ಯಶಸ್ವಿಯಾಗದ ಠೇವಣಿದಾರರಿಗೆ ಬಿಡ್ ಮುಗಿದ ನಂತರ ಅದೇ ದಿನ ಹಿಂದಿರುಗಿಸಲಾಗುವುದು.
10. ಸರ್ಕಾರದ ವಸ್ತುಗಳ ಹರಾಜಿನಲ್ಲಿ ಭಾಗೀದಾರರಾಗುವ ಎಲ್ಲರೂ ಸರ್ಕಾರಿ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

ಕಮಾಂಡೆಂಟ್,
ಪಿ.ಆರ್. 345 ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 8ನೇ ಪಡೆ, ಶಿವಮೊಗ್ಗ.

**FORM - I**

**Office of the Deputy Conservator of Forest, Mangalore Division, Mangalore**

**NOTIFICATION**

**Dated 21st July 2004**

Shri **S. CHARMANI** working as Watchman in the Forest Department of Divisional Manager, K.F.D.C. Ltd., Sullia Rubber Division, Sullia, is permitted to change his name to as **S. CHANDRANATHA**

PD-128 Deputy Conservator of Forest,
Manager Division, Mangalore.

**FORM IV**

**(See Rule 12)**

**NOTICE**

It is hereby notified that the undersigned has changed his/her name from **BHIMALAXMAN MANG** to **BHIMA LAXMAN MAISHALE.**

PD-129 **BHIMA LAXMAN MAISHALE**

**ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು, ನಿರ್ದೇಶನಾಲಯ, ರಾಜಾಜಿನಗರ, ಬೆಂಗಳೂರು-560 010**

**ಟೆಂಡರು ವಿಚಾರ ಸಂಖ್ಯೆ: ಇಎಸ್‌ಐಎಸ್:ಇಸಿಎಸ್:10:2004-05, ದಿನಾಂಕ: 20ನೇ ಜುಲೈ 2004**

ಹಿಮೋಡಯಾಲಿಸಿಸ್ ಘಟಕಕ್ಕೆ ಅಗತ್ಯವಿರುವ ಪೂರಕ ರಸಾಯನಿಕ ವಸ್ತುಗಳ ಹಾಗೂ ಇತರೆ ಸಾಮಗ್ರಿಗಳ ಸರಬರಾಜು ಮಾಡಲು ತಯಾರಕರು ಅಧಿಕೃತ ವಿತರಕರುಗಳಿಂದ ಮಾರಾಟಗಾರರದಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ:

| ಕ್ರಮ ಸಂಖ್ಯೆ | ವಿಚಾರ ಸಂಖ್ಯೆ | ಸರಬರಾಜು ಮಾಡಬೇಕಾದ ವಿವರ | ಟೆಂಡರು ನಮೂನೆ ಬೆಲೆ (ಸೇರಿಗೆ ಸೇರಿ) | ಮುಂಗಡ ಠೇವಣಿ | ಟೆಂಡರು ಫಾರಂ ಕೆಲಸದ ದಿನಗಳಲ್ಲಿ ಮಾರಾಟ ಮಾಡುವ ಸಮಯ | ಭರ್ತಿ ಮಾಡಿದ ಟೆಂಡರುಗಳನ್ನು ಸ್ವೀಕರಿಸುವ ಸಮಯ ಮತ್ತು ದಿನಾಂಕ | ಮೊಹರು ಮಾಡಿದ ಲಕೋಟೆಗಳನ್ನು ತೆರೆಯುವ ಸಮಯ ಮತ್ತು ದಿನಾಂಕ |
|---|---|---|---|---|---|---|---|
| 1 | ಇಎಸ್‌ಐಎಸ್: ಇಸಿಎಸ್:ಆರ್‌ಸಿ: 01:2004-05 | | 1000<br>80<br>1080 | 1500.00 | 28.8.2004 | 30.8.2004<br>2.30 | 30.8.2004 ರ ಮಧ್ಯಾಹ್ನ 3.00 ಗಂಟೆಗೆ |

ನಿರ್ದೇಶಕರು,
ಕಾರಾವಿ ಯೋಜನೆ (ವೈ) ಸೇವೆಗಳು

**DIRECTORATE OF EMPLOYEES STATE INSURANCE (MEDICAL) SERVICES, RAJAJINAGAR, BANGALORE-10**

**Tender Enquiry No. ESIS/ECS/10/2004-05, dated 20th July 2004**

Sealed Tenders are invited for the supply of Chemicals and other Accessories to Haemodialysis. Machine from the manufacturers and authorised dealers.

| Sl. No. | Enquiry No. | Name of the chemicals & other Accessories | Cost of Tender Form (including Tax) | E.M.D. | Last date for sale of Tender Form | Sealed Tenders will be received upto | Tenders will be opened on |
|---|---|---|---|---|---|---|---|
| 1 | ESIS/ECS/ RC/01/ 04-05 | Accessories to Haemodialysis limit | Rs. 1000/-<br>KST 8% 80/-<br>Rs. 1080/- | 1500/- | 28.8.04 | 30.8.04 up to 2.30 pm | 30.8.04 at 3.00 pm |

PD-73 **Director**
E.S.I. Scheme (Med.) Services.

## ಲೋಕೋಪಯೋಗಿ ಇಲಾಖೆ
## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
## ಟೆಂಡರು ಪ್ರಕಟಣೆ

**ನಂ: ಇಎನ್‌ಹೆಚ್/ಚಿ/ಸ.ಇ:2/ಟೆಂ.ಪ್ರ/ರಾಹೆ.13/ಸೇತುವೆ/ಕಿ.ಮೀ. 503.03/2004-05/991, ದಿನಾಂಕ: 13ನೇ ಜುಲೈ 2004**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆಯನ್ನು ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 24.8.2004 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ಟೆಂಡರನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

**ಟೆಂಡರು ಕರೆ ಸಂಖ್ಯೆ: ಮೊದಲನೇ ಕರೆ**

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿ ಪಡಿಸಿದ ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣ ಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ರಾಹೆ - 13 ರ ಸೊಲ್ಲಾಪುರ-ಮಂಗಳೂರು ರಸ್ತೆ ಕಿ.ಮೀ. 503.03 ರ ಸೇತುವೆಯ ಮರುನಿರ್ಮಾಣ ಮತ್ತು ಕಿ.ಮೀ. 505.45 ರಿಂದ 505.84 ರವರೆಗೆ ರಸ್ತೆಯ ಮರು ವಿನ್ಯಾಸದ ಕಾಮಗಾರಿ | ರೂ. 43.00 ಲಕ್ಷಗಳು | ರೂ. 43,000/- | 4,000 + 8% ಕೆಎಸ್‌ಟಿ + ಕೆಎಸ್‌ಟಿಯ ಮೇಲೆ 10% ಸರ್‌ಚಾರ್ಜ್ | ಸೇತುವೆ ಮರು ನಿರ್ಮಾಣ ಹಾಗೂ ರಸ್ತೆ ಮರು ವಿನ್ಯಾಸದ ಕಾಮಗಾರಿ | 9 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:-**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ನೋಂದಣಿ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಸಲ್ಲಿಸತಕ್ಕದ್ದು. ಹಾಗೂ ಕಾಮಗಾರಿಗೆ ಬೇಕಾದ ಯಂತ್ರೋಪಕರಣಗಳ ಮಾಲೀಕತ್ವದ ದಾಖಲಾತಿಗಳ ದೃಢೀಕೃತ ಜೆರಾಕ್ಸ್ ಪ್ರತಿಗಳನ್ನು ಕಡ್ಡಾಯವಾಗಿ ಸಲ್ಲಿಸಬೇಕು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | 10.8.2004 (ಕಛೇರಿ ವೇಳೆಯಲ್ಲಿ) |
| ಆ | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | 17.8.2004 ರಿಂದ 18.8.2004 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | 24.8.2004, ಮಧ್ಯಾಹ್ನ 4.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ | ಟೆಂಡರ್‌ಗಳನ್ನು ತೆರೆಯುವ ದಿನಾಂಕ | 24.8.2004 ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

## ಟೆಂಡರ್‌ಗಳಿಗೆ ಷರತ್ತುಗಳು

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್.ಡಿ.ಆರ್.: ಪೇ ಆರ್ಡರ್: ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ. ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.-66 ಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ಟೆಂಡರ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1 | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2 | ಪೇವರ್ ಫಿನೀಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3 | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4 | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5 | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6 | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಒ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7 | ಎಕ್ಸ್‌ಕವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8 | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9 | ವೈಬ್ರೇಟರ್‌ಗಳು | ಎರಡು (2) | -ಸದರಿ- |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ.
6. ಟೆಂಡರ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಟೆಂಡರ್‌ಗಳನ್ನು ಅನರ್ಹಗೊಳಿಸಲಾಗುವುದು.

7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಟೆಂಡರಿನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪೆನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ವಿ. ರುದ್ರಪ್ಪ**

ಪಿ.ಆರ್. 347 **ಕಾರ್ಯಪಾಲಕ ಅಭಿಯಂತರು, ರಾ.ಹೆ. ವಿಭಾಗ, ಚಿತ್ರದುರ್ಗ.**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 65 ಡಿಸಭೆ 2004, ದಿನಾಂಕ: 22-7-2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆ:ಸಮಾರಂಭಗಳು ಮತ್ತು ರಾಜಭವನದಲ್ಲಿ ನಡೆಯುವ ಪ್ರತಿಜ್ಞಾ ಸ್ವೀಕಾರ ಸಮಾರಂಭ ಇತ್ಯಾದಿಗಳಿಗೆ ಧ್ವನಿವರ್ಧಕ ವ್ಯವಸ್ಥೆ, ಧ್ವನಿಮುದ್ರಿತ ಶಾಸ್ತ್ರೀಯ ಸಂಗೀತ ಮತ್ತು ಇತರ ಎಲೆಕ್ಟ್ರಾನಿಕ್ ಉಪಕರಣಗಳನ್ನು ದರ ಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಪಡೆಯುವ ಬಗ್ಗೆ ಗುತ್ತಿಗೆಯನ್ನು ದಿನಾಂಕ: 1-9-2004ರಿಂದ 31-8-2005ರ ಒಂದು ವರ್ಷದ ಅವಧಿಗೆ ನೀಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

ಈ ಸಂಬಂಧ ಅವಶ್ಯಕ ಉಪಕರಣಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ:-

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ<br>ರೂ. ಪೈ. |
|---|---|---|
| 01 | ಕಾಲಂ ಸ್ಪೀಕರ್ 60 ಡಬ್ಲ್ಯೂ 100 ವಿ (ಇನ್‌ಡೋರ್) | |
| 02 | ಹೆವಿ ಡ್ಯೂಟಿ ಸ್ಪೀಕರ್ ವಿತ್ ಎಲ್‌ಎಂಯು 12", 200 ಡಬ್ಲ್ಯೂ | |
| 03 | ಸ್ಪೀಕರ್ ಕೇಬಲ್ (ಮಿನಿಮಂ 200 ಫೀಟ್ ಲೆನ್ಸ್) | |
| 04 | 2.5 ಕೆ.ವಿ.ಎ. ಜನರೇಟರ್ per day | |
| 05 | ಟೈಮ್ ಡಿಲೇ : ಎಕೋ ಯುನಿಟ್ | |
| 06 | ಪ್ರಿ-ಆಂಪ್ಲಿಫೈಯರ್ 6 ಚಾನಲ್ | |
| 07 | ಪ್ರಿ-ಆಂಪ್ಲಿಫೈಯರ್ 12 ಚಾನಲ್ | |
| 08 | ಪವರ್ ಆಂಪ್ಲಿಫೈಯರ್ 100 ವಾಟ್ಸ್ | |
| 09 | ಪವರ್ ಆಂಪ್ಲಿಫೈಯರ್ 200 ವಾಟ್ಸ್ | |
| 10 | ಪವರ್ ಆಂಪ್ಲಿಫೈಯರ್ 300 ವಾಟ್ಸ್ | |
| 11 | ಪವರ್ ಆಂಪ್ಲಿಫೈಯರ್ (ಬೂಸ್ಟರ್) 600 ವಾಟ್ಸ್ | |
| 12 | ಕಾಲಂ ಸ್ಟ್ರಕ್ಚರ್ 25 ಫೀಟ್ (if required) | |
| 13 | ಬ್ಯಾಟರಿ ಸ್ಟೇಷನ್ 24 ವಾಟ್ಸ್ ಡಿ.ಸಿ. per day | |
| 14 | ಹೆವಿ ಡ್ಯೂಟಿ ಔಟ್ ಡೋರ್ ಯೂನಿಟ್ ಫಾರ್ ಹಾರನ್ 40 ವಾಟ್ಸ್ | |
| 15 | ಲೈನ್ ಮ್ಯಾಚಿಂಗ್ ಯೂನಿಟ್ | |
| 16 | ರೆಕಾರ್ಡಿಂಗ್ : ಪ್ಲೇಬ್ಯಾಕ್ ಡೆಕ್ | |
| 17 | ಟ್ರಂಪ್ಟ್ ಹಾರನ್ ಫಾರ್ ಔಟ್ ಡೋರ್ | |
| 18 | ಫಾರ್ ಸಿ 60 ಕ್ಯಾಸೆಟ್ (ಫಾರ್ ಆಡಿಯೋ ರೆಕಾರ್ಡಿಂಗ್ ಇನ್‌ಕ್ಲೂಡಿಂಗ್ ಲೇಬರ್ ಚಾರ್ಜಸ್) | |
| 19 | ಪವರ್ ಸಪ್ಲೈ ಯೂನಿಟ್, ಎಲ್‌ಬಿಡಿ 8774 | |
| 20 | ಚೇರ್‌ಮನ್ ಯೂನಿಟ್, ಎಲ್‌ಬಿಡಿ 8781 | |
| 21 | ಡೆಲಿಗೇಟ್ ಯೂನಿಟ್ ಎಲ್‌ಬಿಡಿ 8782 | |
| 22 | ಸೆಕ್ರೆಟರಿ ಯೂನಿಟ್ ಎಲ್‌ಬಿಡಿ 8783 | |
| 23 | ಮೈಕ್ ಎಕ್ಸ್‌ಟೆನ್‌ಷನ್ ಯೂನಿಟ್ ಎಲ್‌ಬಿಡಿ 8784 | |
| 24 | 2.5 ಕೆ.ವಿ.ಎ. ಸ್ಟೆಬಿಲೈಜರ್ | |

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ ರೂ. ಪೈ. |
|---|---|---|
| 25 | ಮೈಕ್ ವಿತ್ 25 ಫೀಟ್ ಕೇಬಲ್ ಅಂಡ್ ಎಂಡ್ ಕನೆಕ್ಟರ್ | |
| 26 | ಮಲ್ಟಿ ಕೋಡ್ ಕೇಬಲ್ ಜಿ.ಬಿ. | |
| 27 | ಎಫ್.ಎಂ. ಮೈಕ್ ವಿತ್ ರಿಸೀವರ್ | |
| 28 | ಹೈಟೆಡ್ ಸ್ಟ್ಯಾಂಡ್ ವಿತ್ 1000 ವಾಟ್ಸ್ ಸ್ಪೀಕರ್ | |

**ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳು ಈ ಕೆಳಗಿನಂತೆ ಇವೆ:-**

1) ಮೊಹರಾದ ಟೆಂಡರ್ ಲಕೋಟೆ ಮೇಲೆ "ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡು ದರ ಗುತ್ತಿಗೆ" ಎಂದು ಬರೆದಿರತಕ್ಕದ್ದು.
2) ಸಲ್ಲಿಸಿರುವ ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.10,000/- (ರೂಪಾಯಿ ಹತ್ತು ಸಾವಿರಗಳು ಮಾತ್ರ)ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು.
3) ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4) ಟೆಂಡರ್ ಸಲ್ಲಿಸಲು ಕೊನೆ ದಿನಾಂಕ: 24-8-2004ರ ಮಧ್ಯಾಹ್ನ 3-00 ಗಂಟೆ. ಟೆಂಡರ್‌ಗಳನ್ನು ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು, ಇಲ್ಲಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
5) ಈ ಟೆಂಡರ್‌ಗಳನ್ನು ದಿನಾಂಕ: 24-8-2004ರ ಮಧ್ಯಾಹ್ನ 3-30 ಗಂಟೆಗೆ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು, ಇವರ ಕಚೇರಿಯಲ್ಲಿ ತೆರೆಯಲಾಗುವುದು.
6) ನಮೂದಿಸಿರುವ ದರಗಳಲ್ಲಿ ಉಪಕರಣಗಳ ಸಾಗಾಣಿಕೆ ವೆಚ್ಚ ಮತ್ತು ಕಾರ್ಮಿಕ ವೆಚ್ಚವೂ ಸೇರಿರತಕ್ಕದ್ದು.
7) ಉಪಕರಣಗಳನ್ನು 2ನೇ ದಿನ ಅಥವಾ ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ, ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇ. 25ರಷ್ಟು ರಿಯಾಯಿತಿ ನೀಡತಕ್ಕದ್ದು.
8) ಒಳ್ಳೆಯ ಗುಣಮಟ್ಟದ ಉಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು.
9) ಅವಶ್ಯಕತೆಗನುಸಾರವಾಗಿ ರಜಾ ದಿನಗಳಲ್ಲೂ ಹಾಗೂ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ ಸಹ ಧ್ವನಿವರ್ಧಕ ವ್ಯವಸ್ಥೆ ಮತ್ತು ಶಾಸ್ತ್ರೀಯ ಸಂಗೀತ ವ್ಯವಸ್ಥೆಯನ್ನು ಮಾಡಲು ಸಂಸ್ಥೆಯು ಸಿದ್ಧವಿರತಕ್ಕದ್ದು.
10) ದೊಡ್ಡ ಪ್ರಮಾಣದ ಸಭೆ : ಸಮಾರಂಭಗಳಲ್ಲಿ ಧ್ವನಿವರ್ಧಕ ವ್ಯವಸ್ಥೆ ಮಾಡಿ ಅನುಭವವಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
11) ಉತ್ತಮ ಗುಣಮಟ್ಟದ ಉಪಕರಣಗಳನ್ನು ಉಪಯೋಗಿಸಿಕೊಂಡು ತೃಪ್ತಿಕರವಾಗಿ ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡು ಮಾಡಲು ವಿಫಲರಾದಲ್ಲಿ, ಅವಧಿಗೆ ಮೊದಲೇ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.
12) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ಬಾಕಿ / ದೂರು ಇಲ್ಲದಿದ್ದಲ್ಲಿ, ಈ ಮೊತ್ತವನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
13) ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೇ ಸಿದ್ಧಗೊಳಿಸಲು ಶಕ್ತರಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
14) ಗುತ್ತಿಗೆ ಅವಧಿಯು ದಿನಾಂಕ: 1-9-2004ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
15) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.
16) ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ)ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
17) ಯಾವುದೇ ಕಾರಣವನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

**ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,**

ಪಿ.ಆರ್. 348

**ಹೆಚ್.ಕೆ. ರವಿಮೂರ್ತಿ**

**ಸರ್ಕಾರದ ಅಧೀನ ಕಾರ್ಯದರ್ಶಿ,**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ 1).**

**FORM IV**

**(See Rule 12)**

**NOTICE**

It is hereby notified that the undersigned has changed his name from **BASAVANNEPPA PRABHAPPA KSHOURAD** to **BASAVANNEPPA PRABHAPPA MULGUND.**

PD-127

**BASAVANNEPPA PRABHAPPA MULGUND**